ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಜಮೀನಿನ ಮಾಲೀಕರು/ರೈತರಿಗೆ ಪರಿಹಾರಕ್ಕೆ ಅನುಸರಿಸಲಾಗಿರುವ ಮಾನದಂಡಗಳ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

018 (147) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಳೆದ 10 ವರ್ಷಗಳಲ್ಲಿ ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರವು ನಿವೇಶನ ನಿರ್ಮಾಣಕ್ಕಾಗಿ ವಶಪಡಿಸಿಕೊಂಡ ಜಮೀನಿನ ವಿಸ್ತೀರ್ಣವೆಷ್ಟು ; ಈ ಜಮೀನಿನಲ್ಲಿ ನಿರ್ಮಿಸಲಾದ ಒಟ್ಟು ನಿವೇಶನಗಳೆಷ್ಟು ; ಅವುಗಳಲ್ಲಿ ಯಾವ ಯಾವ ಅಳತೆಗಳಲ್ಲಿ ಎಷ್ಟು ನಿವೇಶನಗಳನ್ನು ನಿರ್ಮಿಸಲಾಗಿರುತ್ತದೆ ; (ವರ್ಷವಾರು, ಸಂಪೂರ್ಣ ಮಾಹಿತಿ ನೀಡುವುದು)

(ಆ) ವಶಪಡಿಸಿಕೊಂಡಿರುವ ಜಮೀನಿನ ಮಾಲೀಕರು/ರೈತರಿಗೆ ಪ್ರತಿ ಎಕರೆಗೆ ನೀಡಲಾಗಿರುವ ಪರಿಹಾರ ಧನವೆಷ್ಟು ; ಪರಿಹಾರಕ್ಕೆ ಅನುಸರಿಸಲಾಗಿರುವ ಮಾನದಂಡಗಳೇನು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಇಲ್ಲಿಯವರೆಗೂ ನಿವೇಶನ ಹಂಚಿಕೆಗಾಗಿ ಎಷ್ಟು ಬಾರಿ ಅಧಿಸೂಚನೆಯನ್ನು ಹೊರಡಿಸಲಾಗಿದೆ ; ಪ್ರತಿ ಅಧಿಸೂಚನೆಯಲ್ಲೂ ಯಾವ ಯಾವ ಅಳತೆಯ ನಿವೇಶನಗಳನ್ನು ಹಂಚಿಕೆಗಾಗಿ ಪ್ರಕಟಿಸಲಾಗಿದೆ ; ನಿವೇಶನಕ್ಕಾಗಿ ಅರ್ಜಿ ಸಲ್ಲಿಸಿದವರ ಸಂಖ್ಯೆ ಎಷ್ಟು ಹಾಗೂ ಹಂಚಿಕೆ ಮಾಡಿ ನಿವೇಶನ ಪಡೆದವರ ಸಂಖ್ಯೆ ಎಷ್ಟು ; ನಿವೇಶನ ಪಡೆಯದಿರುವವರ ಸಂಖ್ಯೆ ಎಷ್ಟು ; ಪಡೆಯದಿರುವುದಕ್ಕೆ ಕಾರಣಗಳೇನು ; (ಹೆಸರು ಮತ್ತು ವಿಳಾಸ ಸಹಿತ ಸಂಪೂರ್ಣ ಮಾಹಿತಿ ನೀಡುವುದು)

(ಈ) ನಿವೇಶನ ಹಂಚಿಕೆಗೆ ಪ್ರಾಧಿಕಾರವು ಅನುಸರಿಸಲಾಗಿರುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ನೀಡುವುದು)